# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1200

ವಿಧಾನ ಪರಿಷತ್ತು ಸದಸ್ಯರ ಹೆಸರು : ಶ್ರೀ ರಘುನಾಥ ರಾವ್ ಮಲ್ಕಾಪೂರೆ

ಉತ್ತರಿಸಬೇಕಾದ ದಿನಾಂಕ : 16.03.2021

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೀದರ್ ಜಿಲ್ಲೆಯಲ್ಲಿ ಸಾರ್ವಜನಿಕ ಪಡಿತರ ಆಹಾರವನ್ನು ವಿತರಿಸಲು ಬಯೊಮೆಟ್ರಿಕ್ ಯಂತ್ರಗಳನ್ನು ಅಳವಡಿಸಿರುವುದರಿಂದ ವಯೋವೃದ್ಧರ ಹಾಗೂ ಹಿರಿಯ ನಾಗರಿಕ ಹೆಬ್ಬೆಟ್ಟಿನ ಗುರುತನ್ನು ಬಯೊಮೆಟ್ರಿಕ್ ಯಂತ್ರ ಗುರುತಿಸಲು ಸಾಧ್ಯವಾಗದೇ ಇರುವ ಪ್ರಯುಕ್ತ ಪಡಿತರ ಆಹಾರ ವಿತರಿಸಲಾಗುತ್ತಿಲ್ಲ ಎಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಮಾಹಿತಿ ನೀಡುವುದು) | ಬಂದಿರುತ್ತದೆ. |
| ಆ | ಹಾಗಿದ್ದಲ್ಲಿ, ವಯೋವೃದ್ಧರು ಹಾಗೂ ಹಿರಿಯ ನಾಗರಿಕರಿಗೆ ಬಯೋಮೆಟ್ರಿಕ್ ಯಂತ್ರದ ಬದಲಾಗಿ ಬೇರೆ ಪರ್ಯಾಯವಾಗಿ ಯಾವ ಮಾರ್ಗಗಳನ್ನು ಅನುಸರಿಸಿ ಪಡಿತರ ಆಹಾರ ವಿತರಿಸಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು) | ಬಯೋಮೆಟ್ರಿಕ್ ವ್ಯವಸ್ಥೆಯನ್ನು ಪಾಲಿಸಲು ಸಾಧ್ಯವಿಲ್ಲದ ವ್ಯಕ್ತಿಗಳಿಗೆ ಆಗುವ ತೊಂದರೆ ತಪ್ಪಿಸಲು ಆಹಾರ ನಿರೀಕ್ಷಕರ ಹಂತದಲ್ಲಿ ಬಯೋಮೆಟ್ರಿಕ್ ವ್ಯವಸ್ಥೆಯಿಂದ ವಿನಾಯಿತಿ ನೀಡಿ ಒಟಿಪಿ ಮುಖಾಂತರ ಪಡಿತರವನ್ನು ಪಡೆಯಲು ಅವಕಾಶ ಕಲ್ಪಿಸಲಾಗಿದೆ. |

**ಆನಾಸ 101 ಡಿಆರ್‌ಎ 2021 (ಇ-ಆಫೀಸ್)**

(ಉಮೇಶ ವಿ. ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.